ಡಾ|| ಕೆ. ಎನ್. ಚಿಟ್ನಿಸ್

# ಸವಣೂರ ನವಾಬರು

ಸವಣೂರ ನವಾಬರ ಮೂಲಸ್ಥಾನವು ಅಫಗಾಣಿಸ್ತಾನವು. ಈ ಮನೆತನದ ಮೂಲಪುರುಷನು ಅಬ್ದುಲ ಕರೀಮ ಖಾನನು. ಇವನಿಂದ ಹಿಂದಿನ ೧೫ನೆಯ ತಲೆಯವನಾದ ಮಲಿಕ ಅವತಾರಖಾನನು ತೈಮೂರ ಲಂಗನ ಸೈನ್ಯದ ಸಂಗಡ ಹಿಂದುಸ್ತಾನಕ್ಕೆ ಬಂದನು. ೧೮ ನೆಯ ತಲೆಯವನಾದ ದೊದಾಖಾನನು. 'ನವಾಬ' ಎಂಬ ಪದವಿಯನ್ನು ಧಾರಣ ಮಾಡಿದನು. ಮತ್ತು ಮುಘಲ ಆಸ್ಥಾನದಲ್ಲಿ ಮಹತ್ವದ ಸ್ಥಾನವನ್ನು ಪಡೆದುಕೊಂಡನು. ೨೦ ನೆಯ ತಲೆಯವನಾದ ನವಾಬ ಬಹಲೋಲಖಾನನು ದಕ್ಷಿಣಕ್ಕೆ ಬಂದು ವಿಜಾಪುರದ ೨ನೆಯ ಅಲಿ ಆದಿಲಶಹನ ಆಸ್ಥಾನವನ್ನು ಸೇರಿಕೊಂಡನು. ಬಹಲೋಲಖಾನನ ನಂತರ ಇವನ ಮಗ ಅಬ್ದುಲ ರಹೀಮನು ಈ ಮನೆತನಕ್ಕೆ ಪ್ರಮುಖನಾದನು. ಕೊಪ್ಪಳವು ಇವನ ಜಹಗೀರಿತ್ತು.

ಇವನ ನಂತರ ಬಂದ ಅಬ್ದುಲ ಕರೀಮ ಬಹಲೋಲಖಾನನು ವಿಜಾಪುರದ ಆಸ್ಥಾನದಲ್ಲಿಯ ಅತಿ ಬಲಶಾಲಿಗಳಾದ ಮನ್ನೆಯರಲ್ಲಿ ಒಬ್ಬನಿದ್ದನು, ಇವನು ೧೬೭೫ ರಿಂದ ೧೬೭೭ ರ ವರೆಗೆ ವಿಜಾಪುರದ ವಜೀರನಾಗಿದ್ದನು. ಮಿರಜ ಮತ್ತು ಬಂಕಾಪುರ ಇವು ಇವನ ಮುಖ್ಯ ಜಹಗೀರುಗಳಿದ್ದವು. ಆದವಾನಿಯ ಜಹಗೀರದಾರನಾದ ಮಸವೂದಖಾನನ ಮಗಳೊಡನೆ ಅಬ್ದುಲ ಕರೀಮನ ಲಗ್ನವಾದದ್ದರಿಂದ ರಾಜಧಾನಿಯಲ್ಲಿ ಅಬಿಸೀನಿಯನ್ ಪಕ್ಷವು ಇವನನ್ನು ಎತ್ತಿ ಹಿಡಿಯಿತು.

ಸಿಕಂದರ ಆದಿಲಶಹನು ಅಬ್ದುಲ ಕರೀಮ ಬಹಲೋಲಖಾನನಿಗೆ ಸನದು ಹಾಕಿಕೊಟ್ಟು ಬಂಕಾಪುರ ಜಹಗೀರಿನ ೨೨ ಮಹಲುಗಳನ್ನು ಬಿಟ್ಟುಕೊಟ್ಟನು. ಇಲ್ಲಿಂದಲೇ ಸವಣೂರ ಸಂಸ್ಥಾನದ ಉದಯವಾಯಿತೆಂದು ಹೇಳಬಹುದು.

೧೬೮೬ ರಲ್ಲಿ ವಿಜಾಪುರದ ಪತನಾನಂತರ ಅಬ್ದುಲ ಕರೀಮಖಾನನ ಮಗ ಅಬ್ದುಲ ರಾವೂಫಖಾನನು ಔರಂಗಜೇಬನ ನೌಕರಿಯನ್ನು ಸ್ವೀಕರಿಸಿದನು. ಔರಂಗಜೇಬನು ರಾವೂಫಖಾನನಿಗೆ ೭೦೦೦ ಜಾತ ಹಾಗೂ ೬೦೦೦ ಸವಾರಿನ ಮನಸಬದಾರನನ್ನಾಗಿ ಮಾಡಿ 'ದಿಲೇರಖಾನ ಬಹಾದೂರ ದಿಲೇರಜಂಗ' ಎಂಬ ಪದವಿಯನ್ನು ಪ್ರಧಾನ ಮಾಡಿದನು. ೨ ಕೋಟಿ ೪೦ ಸಾವಿರ ರೂಪಾಯಿಗಳ ಉತ್ಪನ್ನವಿದ್ದ ೨೨ ಮಹಲುಗಳನ್ನು ಹಾಗೂ ಕಿಲ್ಲೆ ಸರಕಾರ ಬಂಕಾಪುರ, ಸರಕಾರ ಆಜಮನಗರ (ಬೆಳಗಾವಿ) ಮತ್ತು ಸರಕಾರ ತೊರಗಲ್ಲುಗಳನ್ನು ಒಳಗೊಂಡ ಜಹಗೀರನ್ನು ಮುಂದುವರಿಸಿದನು.

ಕೆಲವೇ ದಿನಗಳಲ್ಲಿ ಕಿತ್ತೂರ, ನವಲಗುಂದ, ಶಿರಹಟ್ಟಿ, ಹಾವನೂರ, ಡಂಬಳ ಮತ್ತು ಇತರ ಬಂಡುಗಾರ ಜಮೀನುದಾರರನ್ನು ಹತ್ತಿಕ್ಕಲು ರಾವೂಫಖಾನನನ್ನು ಕಳಿಸಲಾಯಿತು. ೧೭೧೯ ರಲ್ಲಿ ಅಬ್ದುಲ ರಾವೂಫಖಾನನ ಮರಣಾನಂತರ ಅವನ ಮಕ್ಕಳಲ್ಲಿ ಅಧಿಕಾರಕ್ಕಾಗಿ ಒಳಜಗಳಗಳಾಗಿ ಕೊನೆಗೆ ಅಬ್ದುಲ ಗಫಾರಖಾನನು ನವಾಬನಾದನು. ಇವನು ನವಾಬನಾದಾಗ ಮರಾಠೆಯರು

ಬಾಳಾಜಿ ವಿಶ್ವನಾಥ ಪೇಶವೆಯ ನೇತೃತ್ವದಲ್ಲಿ ತಮ್ಮ ರಾಜ್ಯ ವಿಸ್ತಾರದಲ್ಲಿ ತೊಡಗಿದ್ದರು. ಗಫಾರಖಾನನಿಗೆ ಮರಾಠೆಯರ ಸರದಾರ ರಾಸ್ತೆಯ ದಾಳಿಯನ್ನು ಎದುರಿಸ ಬೇಕಾಯಿತು. ರಾಸ್ತೆಗೆ ಮಿಶ್ರೀಕೋಟೆಯನ್ನು ಕೊಟ್ಟು ತಿರುಗಿ ಕಳಿಸಿದನು. ಒಟ್ಟಿನ ಮೇಲೆ ಅಬ್ದುಲ ಗಫಾರನು ಸಂಸ್ಥಾನದ ಬಹುಭಾಗವನ್ನು ಸಂರಕ್ಷಿಸಿ ನೆಟ್ಟಗೆ ಆಳಿದನು. ಅವನು ಮರಣಹೊಂದಿದಾಗ ಅವನ ಮಗ ಅಬ್ದುಲ ಮಜೀದಖಾನನಿಗೆ ವಾಯವ್ಯ ಕಡೆಯ ಒಂದು ಸಣ್ಣ ತುಂಡನ್ನು ಬಿಟ್ಟರೆ ಕೃಷ್ಣಾ-ತುಂಗಭದ್ರೆಯ ನಡುವಿನ ಉಳಿದ ಸಾಧಾರಣ ಎಲ್ಲ ಪ್ರದೇಶವು ಸಿಕ್ಕಿತು. ಉತ್ತರದಲ್ಲಿ ಪಾಚ್ಛಾಪುರದಿಂದ ಹಿಡಿದು ಬೀಳಗಿಯವರೆಗೆ, ದಕ್ಷಿಣದಲ್ಲಿ ಮಾಸೂರಿನಿಂದ ಹರಿಹರದವರೆಗೆ, ಪೂರ್ವದಲ್ಲಿ ಕೊಪ್ಪಳ ದಿಂದ ಕನಕಗಿರಿಯವರೆಗೆ ಹಾಗೂ ಪಶ್ಚಿಮಕ್ಕೆ ಬೆಳಗಾವಿ ಯಿಂದ ಹಿಡಿದು ತೇಗೂರ, ಮಿಶ್ರೀಕೋಟಿ ಮತ್ತು ನಿಡಸಂಗಿಯ ಮೇಲಿಂದ ಹಾನಗಲ್ಲಿನವರೆಗೆ ಇವನ ಸಂಸ್ಥಾನವು ವಿಸ್ತಾರವಾಗಿತ್ತು.




ನವಾಬನ ಕಾಲದಲ್ಲಿಯ ಸವಣೂರ ನಗರದ ನಕ್ಷೆ

ಸೂಚಿ : 1. ಹೆಬ್ಬಾಗಿಲು, 2. ಅಗಡಿ ದರವಾಜ, 3. ದಿಲ್ಲಿ ದಗವಾಜ, 4. ಲಕ್ಷ್ಮೇಶ್ವರ ಬಾಗಿಲು
5. ಫತೇ ದರವಾಜ, 6. ಕೆರೆಬಾಗಿಲು, 7. ಮೋತಿ ತಲಾವ, 8. ಹಿರಾಮಣ ದಂಡಿ
9. ಹೊರಗಿನ ಗೋಡೆ, 10. ಬಂಕಾಪುರ ಬಾಗಿಲು

(ರೇಖಾಚಿತ್ರ : ಮೂಲ/ಲೇಖಕರದು ; ನಕಲು ರಚನೆ : ಶ್ರೀ ಅ. ಲ. ನರಸಿಂಹನ್)

ಅಬ್ದುಲ ಮಜೀದಖಾನನು ಬಹು ಬುದ್ಧಿವಂತನಿದ್ದು ಗುಣಸಂಪನ್ನನಾಗಿದ್ದನು. ಪ್ರಜಾಜನರ ಮನದಲ್ಲಿ ಇವನಿಗೆ ಆದರದ ಸ್ಥಾನವಿದ್ದಿತು. ಇವನ ಕಾಲದಲ್ಲಿ ಅಲೀಖಾನ ದಿವಾಣನು ಬಹಳ ಪ್ರಸಿದ್ಧನಿದ್ದನು. ಇವನು ಮುಘಲರ ಆಳ್ವಿಕೆಯಲ್ಲಿಯ ತೋಡರಮಲ್ಲನಂತೆ ಕೆಳದಿ ಶಿವಪ್ಪನಾಯಕನಂತೆ, ಅಹಮದನಗರದ ಮಲಿಕಅಂಬರನಂತೆ ಭೂಕಂದಾಯದ ವ್ಯವಸ್ಥೆಯನ್ನು ಸರಿಪಡಿಸಿದನು. ವಿಜಯನಗರ ಕಾಲದಲ್ಲಿ ಈ ಪ್ರದೇಶದಲ್ಲಿ ಗೊತ್ತುಪಡಿಸಿದ ಭೂಕಂದಾಯದ ಪ್ರಮಾಣಿತ ದರಕ್ಕೆ (standrad land assessment) ರಾಯರೇಖೆ ಇಲ್ಲವೆ ಹೊಲಪಾರ ಎನ್ನುತ್ತಿದ್ದರು. (ವಿಜಯನಗರದ ಇತರ ಕೆಲವು ಭಾಗಗಳಲ್ಲಿಯೂ ರಾಯರೇಖೆಯು ಪ್ರಚಲಿತವಿತ್ತು). ವಿಜಾಪುರದ ೨ನೆಯ ಅಲೀ ಆದಿಲಶಹನ ಕಾಲದಲ್ಲಿ ರಾಯರೇಖೆಯಲ್ಲಿ ಸುಧಾರಣೆಮಾಡಿ ಪ್ರಮಾಣಿತ ಭೂಕಂದಾಯ ದರಕ್ಕೆ 'ರಕಮ್' ಎಂದು ಕರೆದರು. ಕಾಲಾಂತರದಲ್ಲಿ ಈ ರಕಮಿನ ಜೊತೆಗೆ ಎಷ್ಟೋ ಕರಗಳನ್ನೂ ಪಟ್ಟಿಗಳನ್ನೂ ಹೇರಲಾಯಿತು. ಇವೆಲ್ಲವುಗಳನ್ನೂ ಸರಿಪಡಿಸಿ ಅಲೀಖಾನ ದಿವಾಣನು ಒಂದು ಹೊಸ ಪ್ರಮಾಣಿತ ಭೂಕಂದಾಯದರವನ್ನು ಗೊತ್ತುಪಡಿಸಿದನು. ಇದಕ್ಕೆ 'ಐನಾತಿ' ಎನ್ನುತ್ತಿದ್ದರು. ಪಡಬಿದ್ದ ಜಮೀನುಗಳನ್ನು ಹದಮಾಡಿ ಬಿತ್ತಿ ಸಾಗುವಳಿ ಮಾಡಲು ಪ್ರೋತ್ಸಾಹ ಕೊಟ್ಟನು. ಇಂಥ ಜಮೀನುಗಳನ್ನು ರೈತರಿಗೆ ಲಾವಣಿಗೆ ಕೊಟ್ಟು ಅವರ ಕಡೆಯಿಂದ ಕಡಿಮೆ ಕಂದಾಯವನ್ನು ಅಂದರೆ ಒಂದು ಮಾರು ಭೂಮಿಗೆ ಒಂದು ಸೇರು ಧಾನ್ಯ ಈ ದರದಂತೆ ತೆಗೆದುಕೊಳ್ಳಲು ವ್ಯವಸ್ಥೆ ಮಾಡಿದನು. ಒಂದು ಮಾರು ಜಮೀನಿನಲ್ಲಿ ಎಂಟು ಕೂರಗಿಗಳೂ ಒಂದು ಕೂರಗಿಯಲ್ಲಿ ನಾಲ್ಕೂವರೆ ಬೀಘಾಗಳೂ ಅಂದರೆ ಒಟ್ಟು ಒಂದು ಮಾರಿನಲ್ಲಿ ಮೂವತ್ತಾರು ಬೀಘಾಗಳೂ ಇದ್ದವು. ಈ ಆಕರ್ಷಣೆಯಿಂದ ರೈತರು ಹೆಚ್ಚು ಹೆಚ್ಚು ಜಮೀನುಗಳನ್ನು ಹದಮಾಡಿ ಸಾಗುವಳಿ ಮಾಡಿ ಸಂಸ್ಥಾನದ ಕಂದಾಯದ ಉತ್ಪನ್ನವನ್ನು ಬೆಳೆಸಿದರು.

ಅಬ್ದುಲ ಮಜೀದಖಾನನು ಸವಣೂರ ನವಾಬರಲ್ಲೆಲ್ಲ ಅಗ್ರಗಣ್ಯನು. ಇವನೇ ಹೊಸ ಹುಬ್ಬಳ್ಳಿಯ ಅಂದರೆ ಮಜೀದಪುರದ ಸ್ಥಾಪನೆಯನ್ನು ಮಾಡಿದನು. ದೊಡ್ಡ ದೊಡ್ಡ ಮನೆಗಳನ್ನೂ ರಸ್ತೆಯ ಎರಡೂ ಕಡೆ ಅಂಗಡಿಗಳನ್ನೂ ಕಟ್ಟಿಸಿ ಪೇಟೆಯನ್ನು ನಿರ್ಮಿಸಿದನು. ಇದೆಲ್ಲವನ್ನೂ ಒಂದು ನಕ್ಷೆಯನ್ನು (Plan) ತಯಾರಿಸಿ ಅದರಂತೆ ಕಟ್ಟಿಸಿದನು. ಆ ಮೇಲೆ ಎಷ್ಟೋ ವ್ಯವಸಾಯಗಾರರೂ ಅಂಗಡಿಗಾರರೂ ಸಾವಕಾರರೂ ಬಂದು ತಮ್ಮ ತಮ್ಮ ಮನೆ ಅಂಗಡಿಗಳನ್ನು ಕಟ್ಟಿ ಇಲ್ಲಿಯೇ ಇರಹತ್ತಿದರು. ಇಲ್ಲಿಯ ಸಾವಕಾರರು ದೊಡ್ಡ ಪ್ರಮಾಣದಲ್ಲಿ ಹುಂಡಿಯ ವ್ಯವಹಾರವನ್ನೂ ಮಾಡುತ್ತಿದ್ದರು. ಮಜೀದಪುರ ಇಲ್ಲವೆ ಹೊಸ ಹುಬ್ಬಳ್ಳಿಯ ಜನಸಂಖ್ಯೆಯು ಉತ್ತರೋತ್ತರ ಬೆಳೆಯುತ್ತ ಹೋಯಿತು. (ದಿಲೀರ ಜಂಗೀ, ಪುಟ ೨೩–೨೪).

ಅಬ್ದುಲ ಮಜೀದಖಾನನು ಸವಣೂರ ಪಟ್ಟಣದ ಪೂರ್ವಕ್ಕೆ ಒಂದು ದೊಡ್ಡ ತಟಾಕವನ್ನು ನಿರ್ಮಿಸಿದನು. ಈ ಕೆರೆಯ ಸಲುವಾಗಿ ೬೪,೦೦೦ ರೂಪಾಯಿಗಳನ್ನು ವೆಚ್ಚಮಾಡಿದನು. ಅದರ ನೀರು ಅತ್ಯಂತ ಸಿಹಿ ಮತ್ತು ಸ್ವಚ್ಛ ಇದ್ದದ್ದರಿಂದ ಅದಕ್ಕೆ 'ಮೋತೀ ತಲಾವ' (ಮುತ್ತಿನ ಕೆರೆ) ಎಂದು ಹೆಸರಿಟ್ಟರು. ಕೆರೆಯ ದಕ್ಷಿಣಕ್ಕೆ ನೂತನ ತೋಟವನ್ನು (ನವಾಬಾಗ) ನಿರ್ಮಿಸಿದನು. (ದಿಲೀರ ಜಂಗೀ, ಪುಟ ೨೩–೨೪).

೧೭೪೫ ರ ಸುಮಾರಕ್ಕೆ ಸವಣೂರ ಪ್ರದೇಶದಲ್ಲಿ ಬಾಳಾಜೀ ಬಾಜೀರಾವ ಪೇಶವೆ, ಕೊಲ್ಹಾಪುರದ ಛತ್ರಪತಿ ಸಂಭಾಜಿ ಹಾಗೂ ಹೈದರಾಬಾದಿನ ನಿಜಾಮ ಈ ಮೂವರಲ್ಲಿ ಕರ್ನಾಟಕದ ಮೇಲೆ ಪ್ರಭುತ್ವ ಪಡೆಯುವದಕ್ಕೋಸ್ಕರ ಸಂಘರ್ಷವು ನಡೆದಿತ್ತು. ಸವಣೂರಿನ ನವಾಬ ಮಜೀದಖಾನನು ಕೊಲ್ಹಾಪುರದ ೨ನೆಯ ಸಂಭಾಜಿಯ ಸಹಾಯದಿಂದ ಈ ಪ್ರದೇಶದ ಮೇಲೆ ಆಕ್ರಮಣ ಮಾಡುವ ಬಾಳಾಜೀ ಬಾಜೀರಾಯನ ಸಾಹಸವನ್ನು ತಡೆಹಿಡಿದನು. ಪೇಶವೆ ಮತ್ತು ಸವಣೂರ ನವಾಬನ ನಡುವಿನ ಕಲಹವು ಬೆಳೆಯುತ್ತ ಹೋಯಿತು. ಕೊನೆಗೆ ೧೭೫೬ ರಲ್ಲಿ ಮಜೀದಖಾನನಿಗೆ ಪೇಶವೆಯ ಸಂಗಡ ಒಪ್ಪಂದವನ್ನು ಮಾಡಬೇಕಾಯಿತು. ಈ ಒಪ್ಪಂದದ ಪ್ರಕಾರ ಅಬ್ದುಲ ಮಜೀದಖಾನನು ಬಾಳಾಜೀ ಬಾಜೀರಾವ ಪೇಶವೆಗೆ ೩೬ ಮಹಲುಗಳನ್ನು ಬಿಟ್ಟುಕೊಟ್ಟನು. ಈ ಮಹಲುಗಳು ಯಾವವೆಂದರೆ ಪರಗಣೆ ಬಾಗಲಕೋಟೆ ಬೀಳಗಿ, ಪರಗಣೆ ಆಜಮನಗರ ಬೆಳಗಾವ ಶಹಾಪೂರ, ಕರ್ಯಾತ ತೇಗೂರ ತಡಕೋಡ, ಹಿಸಾರ ಧಾರವಾಡ, ಪರಗಣೆ ಲಕ್ಷ್ಮೇಶ್ವರ, ಪರಗಣೆ ಜಾಲೀಹಾಳ ಬದಾಮಿ,

ಪರಗಣೆ ಮುಳಗುಂದ, ಪರಗಣೆ ರಾಯರ ಹುಬ್ಬಳ್ಳಿ, ಹಿಸಾರ ಹರಿಹರ, ಪರಗಣೆ ಅನವಾಲ, ಪರಗಣೆ ಯಾದ ವಾಡ, ಪರಗಣೆ ಮುರಗೋಡ, ಪರಗಣೆ ಪಾಚ್ಛಾಪುರ, ಪರಗಣೆ ಸಂಪಗಾವ ಕಿತ್ತೂರ, ಕಸಬೆ ನರೇಂದ್ರ, ಹಿಸಾರ ಹಲ್ಯಾಳ, ಪರಗಣೆ ನವಲಗುಂದ, ಪರಗಣೆ ಗುತ್ತಲ ಮುಂತಾದವುಗಳು, ಕರ್ಯಾತ ಅಣ್ಣೀಗೇರಿ, ಕರ್ಯಾತ ದೇವರ ಹುಬ್ಬಳ್ಳಿ, ಸೂಳಬ್ಯಾಹಟ್ಟಿ, ಪರಗಣೆ ಘನದುರ್ಗ, ಪರಗಣೆ ಬನ್ನೂರ, ಪರಗಣೆ ಸತ್ತೀಗೇರಿ, ಪರಗಣೆ ಗೋಕಾಕ, ತಾಲುಕ ಬೆಟಗೇರಿ, ಕರ್ಯಾತ ಅಮ್ಮಿನ ಭಾವಿ, ಕರ್ಯಾತ ಯಕ್ಕುಂಡಿ, ಪರಗಣೆ ಗದಗ, ಪರಗಣೆ ರಟ್ಟೀಹಳ್ಳಿ, ಕರ್ಯಾತ ಜ್ಯಾಡರಹೆಬಳಿ, ರಾವಮುಗುದ, ಪರಗಣೆ ಕೆರೂರ ಸಲಾಬತಖಾನ, ಪರಗಣೆ ಲೋಕಾಪೂರ, ಪರಗಣೆ ಕಡಕೋಳ, ತರ್ಫ ಕೊಣ್ಣೂರ ಮುಂತಾದವುಗಳು.

ಮಜೀದಖಾನನ ಹತ್ತಿರ ಈ ಕೆಳಗಿನ ೨೨ ಮಹಲಗಳೂ ಮೂರು ಸರಕಾರಗಳೂ ಉಳಿದವು: ಪರಗಣೆ ಕುಂದಗೋಳ, ಪರಗಣೆ ಕಾರಡಗಿ ಕಮತರಾಣ, ಪರಗಣೆ ಮಿಶ್ರೀಕೋಟಿ, ಸಮತ ಕಲಘಟಗಿ, ಸಮತ ಬೊಮ್ಮೀಗಟ್ಟಿ, ಸಮತ ತಡಸ, ಸಮತ ಹಿರೇಕೆರೂರ, ಸಮತ ಚಿಕ್ಕೆರೂರ, ಸಮತ ಕೋಡ, ಸಮತ ಕಾಗಿನೆಲ್ಲಿ, ರಾಣೆಬೆನ್ನೂರ, ಸಮತ ನಿಡಸಂಗಿ, ಸಮತ ಶಿಗ್ಗಾವಿ, ಪರಗಣೆ ಹಾನಗಲ, ಪರಗಣೆ ಬಂಕಾಪುರ ಮುಂ., ಪರಗಣೆ ತಿಳವಳ್ಳಿ, ಪರಗಣೆ ಆಡೂರ, ಕುಪ್ಪೇಲೂರ ಮುಂ., ಸಮತ ಮಾಸೂರ, ಪೇರ ಕಸಬೆ ಹಾವೇರಿ, ಪೇಠ ಹಾಂವಸಭಾವಿ, ದೇಹಾತ ಕಿಲ್ಲೆ ಐರಣಿ, ಸರಕಾರ ಬಂಕಾಪುರ, ಸರಕಾರ ತೊರಗಲ ಮತ್ತು ಸರಕಾರ ಆಜಮನಗರ; [ದಿಲೇರಜಂಗೀ, ಪುಟ ೧೫–೨೧] ತಹವ ಕರಾರ ಮದಾರ (ಮುಂಬೈ, ೧೯೧೪) ಪುಟ ೮೬-೮೭, ಪೇಶವೆಯ ಸೈನ್ಯವು ಸ್ವಾರಿಗೆ ಹೋಗುವಾಗ ಇಲ್ಲವೆ ಬಿದನೂರ ಹಾಗೂ ದಕ್ಷಿಣ ಹಿಂದುಸ್ತಾನಕ್ಕೆ ಹೋಗುವಾಗ ಸವಣೂರ ಪ್ರದೇಶದಲ್ಲಿ ತೊಂದರೆ ಕೊಡಬಾರದೆಂದೂ ಕರಾರ ಮಾಡಲಾಯಿತು.

ಪೇಶವೆಯು ತಿರುಗಿ ಹೋದಮೇಲೆ ಸವಣೂರ ನವಾಬನು ಕಳೆದುಕೊಂಡ ಪ್ರದೇಶವನ್ನೂ ರಾಜಸತ್ತೆಯನ್ನೂ ಮರಳಿ ಪಡೆಯುವ ಪ್ರಯತ್ನ ಮಾಡಿದನು. ಇದರಿಂದ ಪೇಶವೆ ಮತ್ತು ನವಾಬನ ನಡುವಿನ ಕಲಹ ತೀವ್ರವಾಗಹತ್ತಿತು. ಅಬ್ದುಲ ಮಜೀದಖಾನನು ಮರಣ ಹೊಂದಿದ ಮೇಲೆ ಅವನ ಮಗ ಅಬ್ದುಲ ಹಕೀಮ ಖಾನನು ನವಾಬನಾದನು. ಇವನೂ ತನ್ನ ತಂದೆಯ ಧೋರಣೆಯನ್ನು ಮುಂದುವರೆಸಿದ್ದರಿಂದ ಪೇಶವೆ ಮತ್ತು ಇವನ ನಡುವೆ ಕಾಳಗವಾಗಿ ಪೇಶವೆಯು ವಿಜಯ ವಾಯಿತು. ೧೭೫೬ರಲ್ಲಿ ಮತ್ತೊಂದು ಒಪ್ಪಂದವಾಗಿ ಹಕೀಮಖಾನನು ಪೇಶವೆಗೆ ಎಷ್ಟೋ ಮಹಲುಗಳನ್ನು ಬಿಟ್ಟುಕೊಟ್ಟನು. ಇವುಗಳಲ್ಲಿ ೧೭೪೭ನೆಯ ಒಪ್ಪಂದ ದಲ್ಲಿ ಬಿಟ್ಟುಕೊಟ್ಟ ಹಾಗೂ ನಂತರ ಮರಳಿ ಪಡೆದ ಮಹಲುಗಳೂ ಇದ್ದವು. ಬಾಳಾಜೀ ಬಾಜೀರಾವ ಪೇಶವೆಗೆ ಬಿಟ್ಟುಕೊಟ್ಟ ಮಹಲುಗಳು ಈ ಕೆಳಗಿನಂತೆ ಇದ್ದವು : ಸರಕಾರ ಬಂಕಾಪುರದಲ್ಲಿಯ ಪರಗಣೆ ಕುಂದಗೋಳ. ಪರಗಣೆ ರಾಯರ ಹುಬ್ಬಳ್ಳಿ, ಪೇಠ ಮಜೀದಪೂರ, ಪರಗಣೆ ಮಿಶ್ರೀಕೋಟಿ, ಸಮತ ತಡಸ, ಅಡವಿ ಸೋಮಾಪೂರ, ಸಮತ ಕಲಘಟಗಿ, ಬೊಮ್ಮಿಗಟ್ಟೆಯ ಜೊತೆಗೆ ನೆಲಿಹರವಿ, ಪರಗಣೆ ಗದಗ, ಸರದೇಶಗತ ಧಾರವಾಡ, ಪರಗಣೆ ಲಕ್ಷ್ಮೇಶ್ವರ ಮತ್ತು ಸರವಾಡ ಸರದೇಶಗತ. ಸರಕಾರ ತೋರಗಲ್ಲಿನಲ್ಲಿಯ ಪರಗಣೆ ಮುಳಗುಂದ, ಕಸಬೆ ಬ್ಯಾಹಟ್ಟಿ, ಉಪ್ಪಿನ ಬೆಟಗೇರಿ, ಕಸಬೆ ಅಮ್ಮಿನಭಾವಿ, ತರ್ಫ ತಡಕೋಡ, ತರ್ಫ ಶಿರೋಳ, ಕಸಬೆ ಕೋಳೀವಾಡ, ಸತ್ತೀಗೇರಿ ಹಾಗೂ ಮುರಗೋಡ, ತರ್ಫ ಕೊಣ್ಣೂರ, ತರ್ಫ ಯಕ್ಕುಂಡಿ, ತರ್ಫ ಅಸುಂಡಿಯ ಜೊತೆಗೆ ಕರೀಕಟ್ಟೆ, ಕೋಟೆ ಹೊಲಿ, ಕಸಬೆ ದೇವರ ಹುಬ್ಬಳ್ಳಿ, ಪರಗಣೆ ಬಾಗಲಕೋಟೆಯ ಜೊತೆಗೆ ಬೀಳಗಿ, ಮತ್ತೀಗಟ್ಟೆಯ ಜೊತೆಗೆ ಕಟಕೇರಿ, ತಲವಾಯಿ ಮುಂ., ಜ್ಯಾಡರಹೆಬ್ಬಳ್ಳಿ, ತರ್ಫ ನರೇಂದ್ರ, ತರ್ಫ ತೇಗೂರ ಮತ್ತು ಪರಗಣೆ ನವಲಗುಂದ. ಸರಕಾರ ಆಜಮನಗರ ದಲ್ಲಿಯ ಪರಗಣೆ ಗೋಕಾಕ, ಪರಗಣೆ ಸಂಪಗಾವ, ಪರಗಣೆ ಪಾದಶಾಪೂರ ಮತ್ತು ಪರಗಣೆ ಆಜಮನಗರ. ಇವೆಲ್ಲ ಮಹಲುಗಳ ಉತ್ಪನ್ನವು ಎಂಟು ಲಕ್ಷ ಇಪ್ಪತ್ತು ಮೂರು ಸಾವಿರದ ಒಂಬೈನೂರ ಇಪ್ಪತ್ತಾರೂವರೆ (೮,೨೩,೯೨೬ ||) ರೂಪಾಯಿಗಳಷ್ಟಿತ್ತು.

ಇದಲ್ಲದೆ ನವಾಬನು ಪೇಶವೆಗೆ ೧೧ ಲಕ್ಷ ರೂಪಾಯಿಗಳ ಕಾಣಿಕೆಯನ್ನು ಸಲ್ಲಿಸಬೇಕೆಂದು ಕರಾರಾಯಿತು. ಈ ಹಣದಲ್ಲಿಯ ೩,೧೦,೦೦೦

ರೂಪಾಯಿಗಳನ್ನು ನಗದಿನಲ್ಲಿಯಾಗಲೀ ಇಲ್ಲವೇ ವಜ್ರ, ಆನೆ ಅಥವಾ ಬೆಲೆಯುಳ್ಳ ವಸ್ತ್ರಗಳ ಕಾಣಿಕೆಯ ರೂಪದಲ್ಲಾಗಲೀ ತಕ್ಷಣ ಕೊಡಬೇಕು. ಉಳಿದ ಹಣದಲ್ಲಿ ೪,೯೦,೦೦೦ ರೂ.ಗಳನ್ನು ಹದಿನೈದು ದಿನಗಳಲ್ಲಿ ಕೊಡಬೇಕು. ಉಳಿದ ೩,೦೦,೦೦೦ ರೂ.ಗಳ ಸಲುವಾಗಿ ಬಂಕಾಪುರ ಕೋಟೆಯನ್ನು ಮಲ್ಹಾರರಾವ ಹೋಳಕರನ ಮುಖಾಂತರ ಪೇಶವೆ ಸರಕಾರದ ಹತ್ತಿರ ಒತ್ತೆ ಇಡಬೇಕು. ಕೋಟೆಯನ್ನು ತಿರುಗಿ ಪಡೆಯಬೇಕಾದರೆ ಒತ್ತೆಯ ಹಣವನ್ನು ಆರು ತಿಂಗಳ ಅವಧಿಯಲ್ಲಿ ತುಂಬಬೇಕು, ಇಲ್ಲದಿದ್ದರೆ ಪೇಶವೆ ಸರಕಾರದ ಕಡೆಗೆಯೇ ಆ ಕೋಟೆಯು ಹೋಗಬೇಕು.

ರಾಯರ ಹುಬ್ಬಳ್ಳಿಯ ಕೋಟೆ, ಕೆರೂರ ಕೋಟೆ ಮತ್ತು ಪರಗಣೆ, ಕಸಬೆ ಬೆಳಗಾವ ಮತ್ತು ಕೋಟೆ ಇವುಗಳನ್ನು ಪೇಶವೆಯು ತೆಗೆದುಕೊಳ್ಳಬೇಕು.

ಅಬ್ದುಲ ಹಕೀಮಖಾನನ ಹತ್ತಿರ ಸರಕಾರ ಬಂಕಾಪುರ ಪರಗಣೆಯಲ್ಲಿಯ ಕೆಳಗಿನ ಮಹಲುಗಳು ಉಳಿದವು : ಸಮತ ಕಾರಡಗಿ, ಸಮತ ನಿಡಸಂಗಿ, ಪರಗಣೆ ಹಾನಗಲ, ಹಿಸಾರ ಮಾಸೂರ, ಸಮತ ಚಿಕ್ಕೆರೂರ, ಪರಗಣೆ ಗುತ್ತಲ, ಪೇಠ ಹಾವೇರಿ, ಕುಪ್ಪೆಲೂರ, ಪೇಠ ಹಾಂವಸಭಾವಿ, ಹಲಗೇರಿ, ಗಂಗ್ಯಾಲೂರ, ಕಸಬೆ ಇಂಗಲಹಳ್ಳಿ, ಮೌಜೆ ಹಂಚಿನಹಾಳ, ನಾಗನೂರ, ದೊಡವಾಡ, ಸಮತ ಹಿರೇಕೆರೂರ, ಸಮತ ತಿಳವಳ್ಳಿ, ಪರಗಣೆ ರಾಣೆಬೆನ್ನೂರ, ಸಮತ ಕಾಗಿನೆಲ್ಲಿ, ನರೇಗಲ ಹಾಗೂ ಠಾಣೆ ಆಡೂರ, ಪರಗಣೆ ಶಿಗ್ಗಾವ, ಕಸಬೆ ಬಂಕಾಪುರ, ಸಮತ ಕೋಡ, ಐರಣಿ, ನಸವಿ, ಹಿರೇಗುಡೂರು, ಪರಗಣೆ, ಅಣ್ಣಿಗೇರಿ, ಕಿಲ್ಲೆ ಪರಸಗಡ ಮತ್ತು ಊರು, ಮೊರಬದಲ್ಲಿನ ಶಿರಕೋಳ, ಸೂಲ ಹಾಗೂ ಸ್ವಾದಿ. ಇವುಗಳಲ್ಲಿ ಗೋವಿನಕೊಪ್ಪವು ರಾಯರ ಹುಬ್ಬಳ್ಳಿ ಪರಗಣೆಯಲ್ಲಿಯೂ ತೊರಗಲ ಸರಕಾರದಲ್ಲಿಯೂ ಇತ್ತು. ಅದರಂತೆ ದೊಡವಾಡವು ಸಂಪಗಾವ ಪುರಗಣೆಯಲ್ಲಿಯೂ ಆಜಮನಗರ ಸರಕಾರದಲ್ಲಿಯೂ ಇತ್ತು. ಒಟ್ಟು ಮೇಲೆ ಹೇಳಿದ ಮಹಾಲ, ಠಾಣೆ, ಕಸಬೆ ಹಾಗೂ ಊರು ಇವುಗಳಿಂದ ಎಂಟು ಲಕ್ಷ ಮೂವತ್ತು ಸಾವಿರದ ಅರವತ್ತೆಂಟು ರೂ. ಮತ್ತು ಹನ್ನೆರೆಡು ಆಣೆಯಷ್ಟು ವಾರ್ಷಿಕ ಉತ್ಪನ್ನವು ಬರುತ್ತಿತ್ತು.

ಹಳೆಯ ಜಹಗೀರರಾದ ಅಜೀಜ ಮಿಯಾ ಇವನಿಗೆ ರೂ. ೨೦,೮೦೦ ಹಾಗೂ ಅಹಮದಖಾನ ವಲದ ಅಲೀಖಾನ ಇವನಿಗೆ ರೂ. ೫೦೦೦ ಮುಟ್ಟಬೇಕು. ರಟ್ಟೀಹಳ್ಳಿ ಜಹಗೀರಿನಿಂದ ರೂ. ೧೯,೦೦೦ ನವಾಬನಿಗೆ ಹೋಗಬೇಕು. ಮಾತ್ರ ಕಿಲ್ಲೆ ಬಂಕಾಪುರ ಜಹಗೀರಿನ ರೂ. ೧೧,೦೦೦ ಅಲ್ಲಿಯ ಬಾದಶಾಹೀ ಕಿಲ್ಲೇದಾರನಿಗೆ ಮುಟ್ಟಬೇಕು. ಹೀಗೆ ಕರಾರ ಆಯಿತು. (ವಿಲೀರ ಜಂಗೀ, ಪುಟ ೨೬-೩೧ ; ತಹಪ ಕರಾರ ಮದಾರ, ಪುಟ ೮೮-೯೦).

೧೭೬೧ರಲ್ಲಿ ಪಾನಿಪತ್ ಯುದ್ಧವಾಗಿ ಅದರಲ್ಲಿ ಮರಾಠೆಯರು ಸೋತರು. ಇದರ ಲಾಭವನ್ನು ತೆಗೆದುಕೊಂಡು ಹೈದರಅಲಿಯು ಸವಣೂರ ಸಂಸ್ಥಾನದಲ್ಲಿಯ ಹಾಗೂ ಸುತ್ತುಮುತ್ತಲಿನ ಪ್ರದೇಶವನ್ನು ಕೈವಶ ಮಾಡಲಾರಂಭಿಸಿದನು. ೧೭೬೪ರಲ್ಲಿ ಹೈದರಅಲಿಯು ನವಾಬನನ್ನು ಸೋಲಿಸಿ ಸ್ವಾದಿಯನ್ನು ಕಸಿದುಕೊಂಡನು. ಆದರೆ ಬೇಗನೇ ಮಾಧವರಾವ ಪೇಶವೆಯು ಹೈದರನನ್ನು ಹತ್ತಿಕ್ಕಿದನು. ೧೭೬೬ರಲ್ಲಿ ಹೈದರನು ಮತ್ತೆ ಸವಣೂರಿನ ಮೇಲೆ ದಂಡೆತ್ತಿಹೋಗಿ ಅದನ್ನು ಕೈವಶ ಮಾಡಿಕೊಂಡನು.

೧೭೭೯ರಲ್ಲಿ ಹಕೀಮಖಾನನ ಮಗ ಅಬ್ದುಲ ಖೈರಖಾನನಿಗೆ ಹೈದರನು ತನ್ನ ಮಗಳನ್ನು ಕೊಟ್ಟು ಲಗ್ನ ಮಾಡಿದ್ದರಿಂದ ಹಕೀಮಖಾನನು ಹೈದರನ ಬಳಗದವನಾದನು. ಹಕೀಮಖಾನನಿಗೆ ಬಾಗಲಕೋಟೆ ಮುಂತಾದ ಮಹಲುಗಳನ್ನು ತಿರುಗಿ ಕೊಡಲಾಯಿತು. ಇದೆಲ್ಲದರ ಬದಲಾಗಿ ನವಾಬನು ಹೈದರನ ಸಹಾಯಕ್ಕೆಂದು ೨೦೦೦ ಕುದುರೆಗಳನ್ನು ಇಡುವ ಕರಾರವಾಯಿತು.

೧೭೮೨ರಲ್ಲಿ ಹೈದರನು ಮರಣ ಹೊಂದಿದನು. ಸವಣೂರ ನವಾಬನ ಬಗ್ಗೆ ಹೈದರನ ಮಗ ಟೀಪೂವಿನ ಮತವು ನೆಟ್ಟಗಿದ್ದಿದ್ದಿಲ್ಲ. ಟೀಪೂ ಮತ್ತು ಹಕೀಮಖಾನನ ಸಂಬಂಧವು ಕೆಡುತ್ತ ಹೋದಂತೆ ಹಕೀಮಖಾನನು ಪೇಶವೆಯ ಸಹಾಯದ ಕಡೆ ಹೊರಳಿದನು. ಹಕೀಮಖಾನನು ಮರಾಠೆಯರ ಜೊತೆ ಕೂಡಿದ್ದನ್ನು ನೋಡಿ ಟೀಪೂ ಸವಣೂರಿಗೆ ದಾಳಿಯಿಟ್ಟನು. ಸವಣೂರನ್ನು ಕೈವಶ ಮಾಡಿಕೊಂಡು ನವಾಬನ ಎಲ್ಲ ಆಸ್ತಿಪಾಸ್ತಿಗಳಿಗೆ

ಕೊಳ್ಳೆ ಹೊಡೆದನು. ಆದರೆ ೧೭೮೭ರಲ್ಲಿ ಆದ ಗಜೇಂದ್ರಗಡದ ಒಪ್ಪಂದದ ನಂತರ ಟೀಪೂ ನವಾಬನಿಗೆ ಸವಣೂರನ್ನು ತಿರುಗಿಕೊಟ್ಟನು. ಆಮೇಲೆ ಅಬ್ದುಲ ಹಕೀಮಖಾನನು ಪುಣೆಗೆ ಹೋಗಿ ಪೇಶವೆ ಕಡೆಯಿಂದ ಪ್ರತಿ ತಿಂಗಳು ೧೦,೦೦೦ ರೂ.ಗಳ ನಿವೃತ್ತಿವೇತನ ಪಡೆಯುತ್ತ ಅಲ್ಲಿಯೇ ಇರಹತ್ತಿದನು.

ಹಕೀಮಖಾನನ ಹಿರಿಯ ಮಗ ತನ್ನ ಹೆಂಡತಿ ಯೊಡನೆ ಶ್ರೀರಂಗಪಟ್ಟಣದಲ್ಲಿಯೇ ಇದ್ದನು. ಆದ್ದರಿಂದ ಎರಡನೆಯ ಮಗನಾದ ಹುಸೇನ ಮಿಯಾನಿಗೆ ತಂದೆಯ ನಂತರ ನಿವೃತ್ತಿವೇತನವು ಸಿಗಲಾರಂಭಿಸಿತು. ಮೂರು ವರ್ಷಗಳ ನಂತರ ಅಬ್ದುಲ ಖೈರಖಾನನು ಸವಣೂರಿಗೆ ಬಂದು ಧೊಂಡೋಪಂತ ಗೋಖಲೆಯ ಸಹಾಯದಿಂದ ತನ್ನ ಹಕ್ಕುಗಳನ್ನು ಪಡೆದನು.

ಪೇಶವೆಯ ಕಡೆಯಿಂದ ನವಾಬನಿಗೆ ವೇತನವು ಪ್ರತಿ ತಿಂಗಳು ಸಿಗದೆ ಯಾವಾಗಾದರೊಮ್ಮೆ ಬರುತ್ತಿತ್ತು. ಆದ್ದರಿಂದ ನವಾಬನ ಆರ್ಥಿಕ ಸ್ಥಿತಿಯು ನೆಟ್ಟಗೆದ್ದಿದ್ದಿಲ್ಲ. ಶ್ರೀರಂಗಪಟ್ಟಣದ ಯುದ್ಧದ ನಂತರ ತಿರುಗಿ ಹೋಗುವ ಮುಂದೆ ಜನರಲ್ ವೆಲ್ಲಸ್ಲಿಯು ಇದನ್ನು ನೋಡಿ ಪ್ರತಿ ತಿಂಗಳು ಬರಬೇಕಾದ ವೇತನದ ಬದಲಾಗಿ ಅಷ್ಟೇ ಉತ್ಪನ್ನದ ಭೂಕಂದಾಯವನ್ನು ಪೇಶವೆ ಸರಕಾರವು ಕೊಡಬೇಕೆಂದು ನಿರ್ಧರಿಸಿ ಆ ಪ್ರಕಾರ ಪೇಶವೆಗೆ ತಿಳಿಸಲು ನವಾಬನಿಗೆ ೪೮,೦೦೦ ರೂ.ಗಳ ವಾರ್ಷಿಕ 'ಕಮಾಲ' ಉತ್ಪನ್ನವಿರುವ ೨೫ ಹಳ್ಳಿಗಳನ್ನು ಬಿಟ್ಟು ಕೊಡ ಲಾಯಿತು. ಅವು ಯಾವುವೆಂದರೆ, ಕಸಬೆ ಸವಣೂರ, ತರ್ಫ ಕಬನೂರ, ಮಣಕಟ್ಟಿ, ಸುರಾಪಕಟ್ಟಿ (ಸುರಣಕಟ್ಟಿ), ಮೌಜೆ ಸಿದ್ದಾಪುರ, ಮೌಜೆ ಕಲೀವಾಳ, ಮೌಜೆ ಮಾದಾಪುರ, ಮೌಜೆ ಹೋತನಹಳ್ಳಿ, ಮೌಜೆ ಮಣ್ಣೂರ, ಮೌಜೆ ನಂದೀಹಳ್ಳಿ, ಮೌಜೆ ಬೇಕಿನಕಟ್ಟಿ, ತರ್ಫ ಬಸವನಕೊಪ್ಪ, ನಾಯಿಕೇರೂರ, ವಡ್ಡಿನಕೊಪ್ಪ, ಹೊನ್ನಿ ಕೊಪ್ಪ, ಡೊಂಬರ ಮತ್ತೂರ, ಮೌಜೆ ತೊರೂರ, ಮೌಜೆ ನೀರಲಕಟ್ಟಿ, ಮೌಜೆ ಹೂಲೀಕಟ್ಟಿ, ಮೌಜೆ ತೊಂಡೂರ, ಮೌಜೆ ಬೆಳೂರ, ಮೌಜೆ ಗಬ್ಬೂರ, ಮೌಜೆ ಚಂದಾಪುರ, ಮೌಜೆ ಮುಳಕೇರಿ ಹಾಗೂ ಮೌಜೆ ಎಕ್ಕೀಕೊಪ್ಪ. (ದಿಲೇರ ಜಂಗೀ, ಪುಟ ೬೭-೬೮). ಈ ೨೫ ಹಳ್ಳಿಗಳ ಉತ್ಪನ್ನವು ನಿಜವಾಗಿಯೂ ೪೮,೦೦೦ರೂ. ೧೫ ಆಣೆ ಇದ್ದು, ಅದರೊಳಗಿಂದ ಸವಣೂರ ಮತ್ತು ಉಳಿದ ಹಳ್ಳಿಗಳ ಜಕಾತ ಹಾಗೂ ಮೋಹತರ್ಫಾ ಇವುಗಳನ್ನು ಕಳೆದು ಉಳಿದ ಉತ್ಪನ್ನವು ನವಾಬನಿಗೆ ಮುಟ್ಟಬೇಕೆಂದು ಎರಡನೇ ಬಾಜೀರಾವ ಪೇಶವೆಯ ಆಜ್ಞಾಪತ್ರವು ೧೮೦೨ರಲ್ಲಿ ಹೊರಟಿತು. ಇವುಗಳ ಪೈಕಿ ಬಸವನಕೊಪ್ಪವನ್ನು ಹುಸೇನ ಮಿಯಾನಿಗೆ ಕೊಡ ಲಾಯಿತು.

ಅಬ್ದುಲ ಖೈರಖಾನರು ೧೮೨೭ರಲ್ಲಿ ಮಡಿದನಂತರ ಅವರ ಹಿರಿಯಮಗ ಅಬ್ದುಲ ಫಯಾಜಖಾನರು ನವಾಬ ರಾದರು. ಇವರು ಕೇವಲ ಎರಡೂವರೆ ತಿಂಗಳಲ್ಲಿಯೇ ಕಾಲವಾದದ್ದರಿಂದ ಇವರ ತಮ್ಮ ಮನವರಖಾನರು ನವಾಬ ಪದವನ್ನು ಸ್ವೀಕರಿಸಿದರು. ಬ್ರಿಟಿಷರ ಕಾಲದಲ್ಲಿ ಮನವರಖಾನ ನವಾಬರನ್ನು ಮೊದಲನೆಯ ತರಗತಿಯ ಸರದಾರರ ಯಾದಿಯಲ್ಲಿ ಇಡಲಾಯಿತು. ೧೮೩೪ರಲ್ಲಿ ಮನವರಖಾನರು ಮಡಿದಮೇಲೆ, ಅವರಿಗೆ ಗಂಡು ಮಕ್ಕಳಿಲ್ಲದ್ದರಿಂದ ಅವರ ತಮ್ಮ ಅಬ್ದುಲ ದಿಲೇರಖಾನ ದಿಲೇರ ಜಂಗ ಅವರು ಮಸನದವನ್ನೇರಿದರು. ಇವರು ಬಹಳ ಕಲಿತವರಿದ್ದು ಇವರ ಜೊತೆಗೆ ಸಂಬಂಧ ಬಂದವರ ಮೇಲ್ಲೆ ಇವರು ತಮ್ಮ ಪ್ರಭಾವವನ್ನು ಬೀರುತ್ತಿದ್ದರು. ೧೮೫೭ರಲ್ಲಿ ಇವರಿಗೆ ಬ್ರಿಟಿಶ್ ಸರಕಾರದಿಂದ ಮುಲಕಿ ಮತ್ತು ಫೌಜದಾರೀ ಅಧಿಕಾರಗಳನ್ನು ಕೊಡಲಾಯಿತು. ಮರಣ ದಂಡನೆಯನ್ನು ವಿಧಿಸುವ ಅಧಿಕಾರವೂ ಇವರಿಗಿತ್ತು. ೧೮೬೨ರಲ್ಲಿ ಮುಂಬೈಯಿಯ ವಿಧಾನ ಪರಿಷತ್ತಿನ (Bombay Legislative Council) ಸಭಾಸದರೆಂದು ಇವರನ್ನು ನೇಮಿಸಲಾಯಿತು. ಇವರು ತಮ್ಮ ಹಳ್ಳಿಗಳಲ್ಲಿಯ ಹೊಲದಳತೆಯನ್ನು ಮಾಡಿಸಿ ಭೂಕಂದಾಯ ಪದ್ಧತಿಯಲ್ಲಿ ಸುಧಾರಣೆ ಮಾಡಿದರು.

೧೮೬೨ರಲ್ಲಿ ಇವರು ಮರಣ ಹೊಂದಲು ಇವರ ಮಗ ಅಬ್ದುಲ ಖೈರಖಾನರು ನವಾಬರಾದರು. ಇವರ ನಂತರ ೧೮೬೮ರಲ್ಲಿ ಇವರ ಮಗ ೨ನೆಯ ಅಬ್ದುಲ ದಿಲೇರಖಾನರು ನವಾಬರಾದರು. ದಿಲೇರಖಾನರು ಬಹಳ ಚಿಕ್ಕವರಿದ್ದದ್ದರಿಂದ ಅವರ ಅಜ್ಜ ಮಹಮದ ಗೌಸಖಾನರ ಪಾಲಕತ್ವ (Guardianship) ದ ಕೆಳಗೆ ಅವರನ್ನು ಇಡಲಾಯಿತು. ಆಗ ಧಾರವಾಡದ ಕಲೆಕ್ಟರ ಮತ್ತು ಪೊಲಿಟಿಕಲ ಎಜೆಂಟರೇ ನವಾಬರ ಆಸ್ತಿಯ ವ್ಯವಸ್ಥೆಯನ್ನು ನೋಡುತ್ತಿದ್ದರು.

೨ನೆಯ ಅಬ್ದುಲ ದಿಲೇರಖಾನರ ನಿಧನಾನಂತರ ೧೮೮೫ರಲ್ಲಿ ಅಬ್ದುಲ ತಬ್ರೇಜಖಾನರು ನವಾಬರಾದರು. ಇವರ ಮಗ ೨ನೆಯ ಅಬ್ದುಲ ಮಜೀದಖಾನರು ಬಹು ಪ್ರಖ್ಯಾತವಾದ ನವಾಬರಾಗಿ ಹೋದರು. ೧೯೧೨ರಲ್ಲಿ ಇವರು ಅಧಿಕಾರಗ್ರಹಣ ಮಾಡಿದರು. ಇವರು ವಿದ್ಯಾವಂತರೂ ಕ್ರೀಡಾಪಟುಗಳೂ ಆಗಿದ್ದರು. ೧ನೆಯ ಮಹಾಯುದ್ಧದಲ್ಲಿ ಬ್ರಿಟಿಶರ ಕಡೆಯಿಂದ ಕಾದಿದರು. ತಮ್ಮ ಸಂಸ್ಥಾನವನ್ನು ಸುಧಾರಿಸಲು ಶ್ರಮಪಟ್ಟರು. ರೈತರಿಗೆ ವಿವಿಧ ಸೌಕರ್ಯಗಳನ್ನು ಒದಗಿಸಿಕೊಟ್ಟರು. ಶಿಕ್ಷಣಕ್ಕೆ ಉತ್ತೇಜನ ಕೊಟ್ಟರು. ೧ನೆಯ ಮಜೀದ ಖಾನರು ಕಟ್ಟಿಸಿದ ಮೋತೀ ತಲಾವ ಎಂಬ ಕೆರೆಯನ್ನು ನೂತನೀಕರಿಸಿದರು. ಇವರ ಕಾಲದಲ್ಲಿ ವ್ಯಾಪಾರೋದ್ಯೋಗಗಳು ಅಭಿವೃದ್ಧಿಗೊಂಡವು. ಸಂಸ್ಥಾನದ ಆದಾಯವು ಬೆಳೆಯಿತು. ನ್ಯಾಯದಾನದ ಯಂತ್ರಣೆಯು ಸುವ್ಯವಸ್ಥಿತವಾಗಿತ್ತು. ಒಟ್ಟಿನ ಮೇಲೆ ಹಳೆಯ ಸವಣೂರನ್ನು ಸುಧಾರಿಸಿ ಹೊಸ ಸವಣೂರನ್ನು ನಿರ್ಮಿಸಿದ ಶ್ರೇಯ ಇವರಿಗೆ ಸಲ್ಲುತ್ತದೆ. ಇವರ ಆಳಿಕೆಯಲ್ಲಿಯೇ ೧೯೪೮ರಲ್ಲಿ ಭಾರತದೊಳಗೆ ಸವಣೂರ ಸಂಸ್ಥಾನವು ವಿಲೀನವಾಯಿತು.

ಸವಣೂರ ನಗರ : ಸವಣೂರ ನಗರದ ಸ್ಥಾಪನೆಯನ್ನು ಅಬ್ದುಲ ರಾವೂಫಖಾನರು ಮಾಡಿದರು. ಇದರಲ್ಲಿ ಎಂಟು ಪೇಟೆಗಳನ್ನು ನಿರ್ಮಿಸಿದರು. ಅವು ಯಾವವೆಂದರೆ ದಲೇಲಪೂರ ಅಥವಾ ಲಷ್ಕರ ಬಾಜಾರ, ಗುರುವಾರ ಪೇಟೆ, ಮಂಗಳವಾರ ಪೇಟೆ, ರಹಮತಪೂರ ಅಥವಾ ಶುಕ್ರವಾರ ಪೇಟೆ, ಕಸಬೆಯಲ್ಲಿಯ ಘಾಜೀಕಟ್ಟಾ ಅಥವಾ ಪಲ್ಯದ ಪೇಟೆ, ಶಹಾಬಾಜಾರ ಅಥವಾ ಹಳೇ ಪೇಟೆ, ಕೋರಿಪೇಟೆ ಮತ್ತು ಬುಧವಾರಪೇಟೆ. ಉನ್ನತವಾದ ಸೌಧಗಳನ್ನು ಕಟ್ಟಲಿಕ್ಕೆ ಜನರಿಗೆ ಅನುಮತಿಯನ್ನು ಕೊಟ್ಟರು. ಮನೆಗಳೂ ಕಟ್ಟಡಗಳೂ ನಿರ್ಮಾಣವಾಗ ಹತ್ತಿದವು. ನಗರದ ಜನಸಂಖ್ಯೆಯಲ್ಲಿ ವೃದ್ಧಿಯಾಗ ತೊಡಗಿತು. ಸವಣೂರ ನಗರಕ್ಕೆ ಕೋಟೆಯನ್ನು ಕಟ್ಟಿಸಲಾಯಿತು. ಅದಕ್ಕೆ ೯ ಬಾಗಿಲುಗಳು (ದರವಾಜೆಗಳು) ಇದ್ದವು. (ಇದರ ಜೊತೆಗೆ ಇದ್ದ ನಕ್ಷೆಯನ್ನು ನೋಡಿರಿ). ಉತ್ತರ ದಿಕ್ಕಿಗೆ ದಿಲ್ಲೀ ದರವಾಜಾ ಹಾಗೂ ಅಗಡಿ ದರವಾಜಾ ಇದ್ದು, ಪಶ್ಚಿಮಕ್ಕೆ ಫಾಟಕ ಅಂದರೆ ಹೆಬ್ಬಾಗಿಲು, ನೈಋತ್ಯಕ್ಕೆ (ಅಥವಾ ಪಶ್ಚಿಮ ಕಡೆಗೆಯೇ) ಬಂಕಾಪುರ ಬಾಗಿಲು, ದಕ್ಷಿಣಕ್ಕೆ ಹಾವೇರಿ ದರವಾಜಾ ಇಲ್ಲವೆ ಹುರಳಿಕೊಪ್ಪಿ ಬಾಗಿಲು, ಆಗ್ನೇಯಕ್ಕೆ ಹಿರಾಮಣಿ ದಿಂಡೀ, ಪೂರ್ವಕ್ಕೆ ತಲಾವ ದರವಾಜಾ ಇಲ್ಲವೆ ಕೆರೆ ಬಾಗಿಲು ಹಾಗೂ ಫತೇ ದರವಾಜಾ, ಕೊನೆಯದಾಗಿ ಈಶಾನ್ಯಕ್ಕೆ ಲಕ್ಷ್ಮೇಶ್ವರ ದರವಾಜಾ ಇದ್ದವು. (ದಿಲೇರ ಜಂಗೀ, ಪುಟ ೧೮೩ ಹಾಗೂ ತಾರೀಖೇ ದಿಲೇರಜಂಗೀಯಲ್ಲಿಯ ನಕ್ಷೆ).

## ಸವಣೂರ ನವಾಬರ ವಂಶಾವಳಿ

(ಅವಶ್ಯವಿದ್ದ ಹೆಸರುಗಳನ್ನಷ್ಟೇ ಕೊಟ್ಟಿದೆ)

